# ಕರ್ನಾಟಕ ವಿಧಾನ ಪರಿಷತ್ತು

## ಚುಕ್ಕೆ ಗುರುತಿಲ್ಲದ ಪ್ರಶ್ನೆ

ಚುಕ್ಕೆ ಗುರುತಿಲ್ಲದ ಪಶ್ನೆ ಸಂಖ್ಯೆ : 139(97)

ವಿಧಾನ ಪರಿಷತ್ತಿನ ಸದಸ್ಯರ ಹೆಸರು : ಶ್ರೀ ಕೆ.ಎ. ತಿಪ್ಪೇಸ್ವಾಮಿ (ನಾಮನಿರ್ದೇಶನ ಹೊಂದಿದವರು)

ಉತ್ತರಿಸಬೇಕಾದ ದಿನಾಂಕ : 01.02.2021

ಉತ್ತರಿಸಬೇಕಾದವರು : ಮಾನ್ಯ ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಪರಿಸ್ಥಿತಿ ಸಚಿವರು

********

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿನ ಕೆಲವೊಂದು ಕೈಗಾರಿಕೆಗಳು ತ್ಯಾಜ್ಯ ಮತ್ತು ಬ್ಯಾಟರಿಗಳನ್ನು ಸುಡುವ ಮೂಲಕ ಕೆಲವೊಂದು ಲೋಹಗಳನ್ನು ಹೊರತೆಗೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಮತ್ತು ಇಂತಹ ಕೃತ್ಯಗಳಿಂದ ಪರಿಸರ ಮಾಲಿನ್ಯವಾಗುತ್ತಿರುವುದಲ್ಲದೆ, ಜನರಲ್ಲಿ ಮಾರಣಾಂತಿಕ ಕಾಯಿಲೆಯಾದ ಶ್ವಾಸಕೋಶದ ಕ್ಯಾನ್ಸರ್ ಹೆಚ್ಚಾಗುತ್ತಿರುವುದು ನಿಜವೇ; | ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ಇಲ್ಲಿ ಕಾನೂನು ಬಾಹಿರವಾಗಿ ಹಳೆಯ ಸೀಸದ ಬ್ಯಾಟರಿಗಳನ್ನು ಸಂಸ್ಕರಿಸಿ ಸೀಸ ಲೋಹವನ್ನು ತೆಗೆಯುವ 03 ಕಾರ್ಖಾನೆಗಳನ್ನು ಮಾಲಿನ್ಯ ನಿಯಂತ್ರಣ ಮಂಡಳಿಯ ಪ್ರಾದೇಶಿಕ ಅಧಿಕಾರಿಗಳು ಗುರುತಿಸಿ ಈ ಘಟಕಗಳ ವಿರುದ್ಧ ಕ್ರಮ ಕೈಗೊಂಡು, ಸದರಿ ಘಟಕಗಳ ಕಾರ್ಯ ಚಟುವಟಿಕೆಗಳನ್ನು ಮುಚ್ಚಿಸಲಾಗಿದೆ. ಈ ಘಟಕಗಳನ್ನು ಹೊರತುಪಡಿಸಿ ಬೇರೆ ಯಾವುದೇ ಕೈಗಾರಿಕೆಗಳು ಅನಧಿಕೃತವಾಗಿ ತ್ಯಾಜ್ಯ ಮತ್ತು ಬ್ಯಾಟರಿ ಸುಡುವ ಮೂಲಕ ಕೆಲವೊಂದು ಲೋಹಗಳನ್ನು ಹೊರ ತೆಗೆಯುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿರುವುದಿಲ್ಲ.<br><br>ಆದಾಗ್ಯೂ ಅಧಿಕೃತ ಕೈಗಾರಿಕೆಗಳು ಇ-ತ್ಯಾಜ್ಯ ಮತ್ತು ನಿಷ್ಪಲವಾದ ಬ್ಯಾಟರಿಗಳನ್ನು ಕೇಂದ್ರ ಮಾಲಿನ್ಯ ನಿಯಂತ್ರಣ ಮಂಡಳಿಯ ಮಾರ್ಗದರ್ಶಿ ಸೂತ್ರದಂತೆ ಸಂಸ್ಕರಿಸಿ ಉಪಯುಕ್ತ ಭಾಗಗಳು ಹಾಗೂ ಲೋಹವನ್ನು ಹೊರತೆಗೆಯಲು ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ಸಮ್ಮತಿ ಹಾಗೂ ಅಧಿಕೃತ ಪತ್ರಗಳನ್ನು ನೀಡಲಾಗುತ್ತಿದೆ. ಮತ್ತು ಈ ಕೈಗಾರಿಕೆಗಳು ಸದರಿ ಮಾರ್ಗದರ್ಶಿ ಸೂತ್ರದ ಪ್ರಕಾರ ಕಾರ್ಯನಿರ್ವಹಿಸುತ್ತಿರುವ ಬಗ್ಗೆ ಮಾಲಿನ್ಯ ನಿಯಂತ್ರಣ ಮಂಡಳಿಯಿಂದ ನಿಗಾವಹಿಸಲಾಗುತ್ತಿದೆ. |

| | | |
|---|---|---|
| ಆ) | ಹಾಗಿದ್ದಲ್ಲಿ, ಇಂತಹ ಕೃತ್ಯಗಳನ್ನು ತಡೆಗಟ್ಟಲು ಸರ್ಕಾರ ಕೈಗೊಂಡಿರುವ ಕ್ರಮಗಳೇನು; (ಸಂಪೂರ್ಣ ಮಾಹಿತಿ ನೀಡುವುದು) | ಬೆಂಗಳೂರು ನಗರ ಜಿಲ್ಲೆ, ಆನೇಕಲ್ ತಾಲ್ಲೂಕು, ಜಿಗಣಿ ಹೋಬಳಿ ಇಲ್ಲಿ ಕಾನೂನು ಬಾಹಿರವಾಗಿ ಹಳೆಯ ಸೀಸದ ಬ್ಯಾಟರಿಗಳನ್ನು ಸಂಸ್ಕರಿಸಿ ಸೀಸ ಲೋಹವನ್ನು ತೆಗೆಯುವ 03 ಕಾರ್ಖಾನೆಗಳಾದ<br>1. ಮೆ॥ ಕೃಷ್ಣ ಎಂಟರ್‌ಪ್ರೈಸಸ್, ಸರ್ವೆ ನಂ. 55, ನೊಸೆನೂರು ಗೊಲ್ಲಹಳ್ಳಿ ಗ್ರಾಮ, ಹಾರಗದ್ದೆ ಅಂಚೆ, ಜಿಗಣಿ ಹೋಬಳಿ, ಆನೇಕಲ್, ಬೆಂಗಳೂರು – 562105<br>2. ಶ್ರೀ ಮಹದೇವಪ್ಪ, ಹೆಚ್, ಬಿ.ವಿ.ಕಂ –ಗ್ರಾಹಕರು ಸರ್ವೆ ನಂ. 53, ಕಾಡಜಕ್ಕನಹಳ್ಳಿ, ಆನೇಕಲ್, ಬೆಂಗಳೂರು<br>3. ಮೆ॥ ಶ್ರೀ ಬಾಲಾಜಿಎಂಟರ್‌ಪ್ರೈಸಸ್, ಸರ್ವೆ ನಂ. 53, ಕಾಡಜಕ್ಕನಹಳ್ಳಿ, ಆನೇಕಲ್, ಬೆಂಗಳೂರು.<br>ಇವುಗಳನ್ನು ಮಾಲಿನ್ಯ ನಿಯಂತ್ರಣ ಮಂಡಳಿಯ ಪ್ರಾದೇಶಿಕ ಅಧಿಕಾರಿಗಳು ಗುರುತಿಸಿ, ಸದರಿ ಘಟಕಗಳ ವಿದ್ಯುತ್ ಸಂಪರ್ಕವನ್ನು ಕಡಿತಗೊಳಿಸಿ, ಕಾರ್ಯ ಚಟುವಟಿಕೆಗಳನ್ನು ಸ್ಥಗಿತಗೊಳಿಸಿರುತ್ತಾರೆ. |
| ಇ) | ರಾಜ್ಯದಲ್ಲಿ ಪ್ರತಿವರ್ಷ ಉತ್ಪನ್ನವಾಗುವ e-waste ಪ್ರಮಾಣ ಎಷ್ಟು; ಈ e-waste ನಲ್ಲಿ ಎಷ್ಟು ಪ್ರಮಾಣದಷ್ಟನ್ನು ಮರುಬಳಕೆ ಮಾಡಲಾಗುತ್ತಿದೆ? (ಜಿಲ್ಲಾವಾರು ಪೂರ್ಣ ಮಾಹಿತಿ ನೀಡುವುದು) | ರಾಜ್ಯದಲ್ಲಿ 2019–20 ರಲ್ಲಿ ಉತ್ಪಾದನೆಯಾಗುವ e-waste ಪ್ರಮಾಣ ಹಾಗೂ ಮರುಬಳಕೆ ವಿವರಗಳು ಈ ಕೆಳಕಂಡಂತಿವೆ.<br>ರಾಜ್ಯ: ಕರ್ನಾಟಕ — ಉತ್ಪಾದನೆ ಮೆಟ್ರಿಕ್‌ಟನ್ ನಲ್ಲಿ (MTPA): 80821.99 — ಮರುಬಳಕೆ ಮೆಟ್ರಿಕ್‌ಟನ್ ನಲ್ಲಿ (MTPA): 11690.73<br>ಕರ್ನಾಟಕ ರಾಜ್ಯ ಮಾಲಿನ್ಯ ನಿಯಂತ್ರಣ ಮಂಡಳಿಯು ರಾಜ್ಯದಲ್ಲಿ ಉತ್ಪತ್ತಿಯಾಗುವ ಹಾಗೂ ಮರುಬಳಕೆಯಾಗುವ e-waste ಪ್ರಮಾಣ ಕುರಿತು ಇ–ತ್ಯಾಜ್ಯ ಇನ್ವೆಂಟರಿ (ಅಧ್ಯಯನ) ನಡೆಸಲು ಮೆ॥ಪರಿಸರ ನಿರ್ವಹಣೆ ಮತ್ತು ನೀತಿ ಸಂಶೋಧನಾ ಸಂಸ್ಥೆ (ಎಂಪ್ರಿ) ಗೆ ಮಂಜೂರಾತಿ ಆದೇಶವನ್ನು ನೀಡಲಾಗಿದೆ ಹಾಗೂ ಈ ಅಧ್ಯಯನದ ವರದಿ ಬಂದ ನಂತರ ಜಿಲ್ಲಾವಾರು ಮಾಹಿತಿಯನ್ನು ನೀಡಲಾಗುವುದು. |

Nested table in row ಇ):

| ರಾಜ್ಯ | ಉತ್ಪಾದನೆ ಮೆಟ್ರಿಕ್‌ಟನ್ ನಲ್ಲಿ (MTPA) | ಮರುಬಳಕೆ ಮೆಟ್ರಿಕ್‌ಟನ್ ನಲ್ಲಿ (MTPA) |
|---|---|---|
| ಕರ್ನಾಟಕ | 80821.99 | 11690.73 |

ಕಡತ ಸಂಖ್ಯೆ: ಅಪಜೀ 1 ಇಎನ್‌ಜಿ 2021

Yogeesh

(ಸಿ.ಪಿ.ಯೋಗೇಶ್ವರ)

ಪ್ರವಾಸೋದ್ಯಮ ಹಾಗೂ ಪರಿಸರ ಮತ್ತು ಜೀವಿಪರಿಸ್ಥಿತಿ

ಸಚಿವರು